ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ,ದಿನಾಂಕ : 25ನೇ ಜುಲೈ, 2019

10. ಶಾಲಾ ಕಾಲೇಜುಗಳ ಮತ್ತು ದೇವಸ್ಥಾನಗಳ ಸಮೀಪ ಬಾರ್ ಮತ್ತು ವೈನ್ ಶಾಪ್ ಇರುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

592 (756) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರದ ನೀತಿ ನಿಯಮಗಳ ಪ್ರಕಾರ ಶಾಲೆಯಿಂದ ಕನಿಷ್ಠ ಎಷ್ಟು ಅಂತರದಲ್ಲಿ ಬಾರ್ ರೆಸ್ಟೋರೆಂಟ್, ವೈನ್ ಶಾಪ್‌ಗಳನ್ನು ಸ್ಥಾಪಿಸಬಹುದಾಗಿದೆ ;

(ಆ) ಈ ನಿಯಮಗಳನ್ವಯ ದೇವಸ್ಥಾನ, ಪ್ರಾರ್ಥನಾ ಮಂದಿರ ಮತ್ತು ಮಧ್ಯದ ಅಂಗಡಿಗಳ ನಡುವೆ ಇರಬೇಕಾದ ಅಂತರ ಎಷ್ಟು ;

(ಇ) ಹಲವಾರು ಸ್ಥಳಗಳಲ್ಲಿ ಶಾಲೆ ಕಾಲೇಜುಗಳ 100-200 ಅಡಿ ಅಂತರದಲ್ಲಿ ಮಧ್ಯದಂಗಡಿಗಳು ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ರಾಜ್ಯದಲ್ಲಿ ಕಾನೂನು ಉಲ್ಲಂಘನೆಯಾದ ಎಷ್ಟು ಪ್ರಕರಣಗಳು ದಾಖಲಾಗಿವೆ ; ಮತ್ತು ಅದರ ಮೇಲೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಉ) ಈ ತರಹದ ನಿಯಮ ಉಲ್ಲಂಘನೆಯಾದರು ಯಾವುದೇ ಕ್ರಮ ಕೈಗೊಳ್ಳದಿರುವ ಅಧಿಕಾರಗಳ ಮೇಲೆ ಸರ್ಕಾರ ಏನು ಕ್ರಮ ಜರುಗಿಸಿದೆ ? (ವಿವರ ನೀಡುವುದು)